# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 1406 (1669) |
| ಸದಸ್ಯರ ಹೆಸರು | : | ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 14/03/2022 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಪ್ರಾಥಮಿಕ ಮತ್ತು ಪ್ರೌಢ ಶಾಲಾ ದೈಹಿಕ ಶಿಕ್ಷಣ ಶಿಕ್ಷಕರ ವೃಂದ ಮತ್ತು ನೇಮಕಾತಿ ನಿಯಮಾವಳಿ ತಿದ್ದುಪಡಿಯ ಕಾರ್ಯ ಮುಕ್ತಾಯಗೊಂಡಿದೆಯೇ; ಮುಕ್ತಾಯಗೊಳ್ಳದಿದ್ದಲ್ಲಿ, ಕಾರಣವೇನು; ವರ್ಷಾನುಗಟ್ಟಲೆ ಈ ಪ್ರಕ್ರಿಯೆಯನ್ನು ನಡೆಸುತ್ತಿರುವುದು ಯಾವ ಕಾರಣಕ್ಕಾಗಿ ಪ್ರಸ್ತಾವನೆ ಯಾವ ಹಂತದಲ್ಲಿದೆ; ಈ ಪ್ರಕ್ರಿಯೆಯನ್ನು ಪ್ರಾರಂಭ ಮಾಡಿದ್ದು ಯಾವಾಗ; ಸಚಿವ ಸಂಪುಟದ ಅನುಮೋದನೆಗೆ ಪ್ರಸ್ತಾವನೆ ಸಲ್ಲಿಕೆಯಾಗಿದೆಯೇ; ಸಲ್ಲಿಕೆಯಾಗದೇ ಹೋದಲ್ಲಿ, ಯಾವ ಕಾರಣಕ್ಕಾಗಿ ಸಲ್ಲಿಕೆಯಾಗಿಲ್ಲ; (ವಿವರ ನೀಡುವುದು) | ಇಲ್ಲ.<br><br>ಸರ್ಕಾರದ ಆದೇಶ ಸಂಖ್ಯೆ:ಇಡಿ 290 ಎಸ್‌ಎಲ್‌ಬಿ 2006, ದಿ:06/08/2007ರಲ್ಲಿ ಪ್ರೋ:ವೈದ್ಯನಾಥನ್ ವರದಿಗೆ ಅನುಮೋದನೆ ನೀಡಿದ್ದು, ಸದರಿ ವರದಿಯಲ್ಲಿನ 14 ಅಂಶಗಳ ಪೈಕಿ 13 ಅಂಶಗಳನ್ನು ಜಾರಿಗೊಳಿಸಲಾಗಿದ್ದು, ಉಳಿದ 14ನೇ ಅಂಶವಾದ ದೈಹಿಕ ಶಿಕ್ಷಣ ಶಿಕ್ಷಕರುಗಳ ಪದನಾಮವನ್ನು "ಸಹ ಶಿಕ್ಷಕರು" (ದೈಹಿಕ ಶಿಕ್ಷಣ) ಎಂದು ಪರಿಗಣಿಸಲು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಮಗ್ರವಾಗಿ ಪರಿಷ್ಕರಣೆ ಮಾಡುವ ಬಗ್ಗೆ ಇಲಾಖಾ ಮುಖ್ಯಸ್ಥರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.<br><br>ಈ ಬಗ್ಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:24/05/2018ರಂದು ಹಾಗೂ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:23/10/2018ರಂದು ನಡೆದ ವೃಂದ ಪರಿಶೀಲನಾ ಸಮಿತಿ ಸಭೆಯಲ್ಲಿ ಕರಡು ನಿಯಮಗಳಲ್ಲಿ ಕೆಲವೊಂದು ಅಂಶಗಳನ್ನು ಸೇರ್ಪಡೆಗೊಳಿಸಲು ಹಾಗೂ ಕೆಲವು ಅಂಶಗಳನ್ನು ಕೈಬಿಡಲು ನಿರ್ಣಯಿಸಿ, ಕರಡು ತಿದ್ದುಪಡಿ ನಿಯಮಗಳನ್ನು ಅನುಮೋದಿಸಿರುತ್ತಾರೆ. |
| ಆ | ವೃಂದ ಮತ್ತು ನೇಮಕಾತಿ ನಿಯಮಾವಳಿಗಳ ತಿದ್ದುಪಡಿ ಮಾಡಲು ಇರುವ ಸಮಸ್ಯೆಗಳೇನು; ಯಾವ ಕಾಲಮಿತಿಯೊಳಗೆ ಈ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು? (ಪ್ರಕ್ರಿಯೆಯ ಸಂಪೂರ್ಣ ವಿವರವನ್ನು ಒದಗಿಸುವುದು) | ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣಾ ತಿದ್ದುಪಡಿ ನಿಯಮಗಳ ಕುರಿತಂತೆ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳ ಇಲಾಖೆಗಳೊಂದಿಗೆ ಸಮಾಲೋಚಿಸಲಾಗಿದ್ದು, ಆರ್ಥಿಕ ಇಲಾಖೆಯು ಕೆಲವು ಮಾಹಿತಿ ಒದಗಿಸುವಂತೆ ಕೋರಿದೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಗಳು ಕೆಲವು ಅಂಶಗಳ ಬಗ್ಗೆ ಸಲಹೆ / ಅಭಿಪ್ರಾಯ ನೀಡಿವೆ.<br><br>ಈ ಕುರಿತಂತೆ ದಿ:17/06/2020ರಂದು ಸರ್ಕಾರದ ಪ್ರಧಾನ |

| | | |
|---|---|---|
| | | ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಮತ್ತು ಇತರೆ ಅಧಿಕಾರಿಗಳೊಂದಿಗೆ ಸಭೆ ನಡೆಸಲಾಗಿದೆ. ಸದರಿ ಸಭೆಯಲ್ಲಿ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಲು ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ನೀಡಿರುವ ಸಲಹೆಗಳನ್ನು ಅಳವಡಿಸಿಕೊಂಡು ಪರಿಷ್ಕೃತ ಕರಡು ನಿಯಮಗಳನ್ನು ಸಿದ್ಧಪಡಿಸಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪರಿಶೋಧನೆಗೆ ಕಳುಹಿಸಲು ನಿರ್ಣಯಿಸಲಾಗಿದೆ. ಅದರಂತೆ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಿ, ಅಭಿಪ್ರಾಯ / ಸಹಮತಿಗಾಗಿ ಕಡತವನ್ನು ದಿ:16/02/2021ರಂದು ಶಿಕ್ಷಣ ಇಲಾಖೆಯಿಂದ ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದು, ಆರ್ಥಿಕ ಇಲಾಖೆಯಿಂದ, "ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ವಿಷಯಕ್ಕೆ ಭಾಗ-1ರ ಕ್ರಮ ಸಂಖ್ಯೆ:8ರಲ್ಲಿನ ಪ್ರೌಢ ಶಾಲೆಯ ಮುಖ್ಯ ಶಿಕ್ಷಕರು / ಶಿಕ್ಷಕಿಯರು 88 ಹುದ್ದೆ ಮತ್ತು 304 ಹುದ್ದೆಗಳು ಹಾಗೂ ಭಾಗ-2ರಲ್ಲಿನ ಕ್ರಮ ಸಂಖ್ಯೆ:23 ಪ್ರೌಢ ಶಾಲಾ ಸಹ ಶಿಕ್ಷಕ / ಶಿಕ್ಷಕರ ಗ್ರೇಡ್-2ರ 1520 ಹುದ್ದೆಗಳು ಹಾಗೂ ಕ್ರಮ ಸಂಖ್ಯೆ:33ರ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್-1ರ 304 ಹುದ್ದೆಗಳು ಮತ್ತು ಭಾಗ-4ರ ಕ್ರಮ ಸಂಖ್ಯೆ:49ರ ಲೆಕ್ಕ ಅಧೀಕ್ಷಕರು 34 ಹುದ್ದೆಗಳಿಗೆ ಸಂಬಂಧಿಸಿದಂತೆ, ಮಾಹಿತಿ / ಸ್ಪಷ್ಟೀಕರಣವನ್ನು ದಾಖಲೆಗಳೊಂದಿಗೆ ಒದಗಿಸುವಂತೆ ಮತ್ತು ಈ ಬಗ್ಗೆ ಆರ್ಥಿಕ ಇಲಾಖೆಯನ್ನು ಸಂಪರ್ಕಿಸುವಂತೆ ತಿಳಿಸಿ ದಿನಾಂಕ:18/08/2021ರಂದು ಕಡತ ಹಿಂದಿರುಗಿಸಿರುತ್ತಾರೆ.<br><br>ಈ ಸಂಬಂಧ ಮಾಹಿತಿ ಕ್ರೋಢೀಕರಿಸಲಾಗುತ್ತಿದ್ದು, ನಂತರ ಆರ್ಥಿಕ ಇಲಾಖೆಯಿಂದ ಕೋರಿರುವ ಮಾಹಿತಿಯನ್ನು ನೀಡಿ, ಆರ್ಥಿಕ ಇಲಾಖೆಯ ಸಹಮತಿ / ಅಭಿಪ್ರಾಯ ಪಡೆದು, ಅವುಗಳನ್ನು ಪರಿಷ್ಕೃತ |
| | | ಕರಡು ನಿಯಮದಲ್ಲಿ ಅಳವಡಿಸಿಕೊಂಡು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಗೆ ಕಳುಹಿಸಲು ಕ್ರಮವಹಿಸಲಾಗುವುದು. ತದನಂತರ ಅಂತಿಮವಾಗಿ ಸಚಿವ ಸಂಪುಟ ಅನುಮೋದನೆ ಪಡೆದು ಕರಡು ನಿಯಮಗಳನ್ನು ಪ್ರಕಟಿಸಿ ನಿಯಮಾನುಸಾರ ಅಂತಿಮಗೊಳಿಸಲಾಗುವುದು. |

ಸಂಖ್ಯೆ:ಇಪಿ 27 ಡಿಎಆರ್ 2022

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು